


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ಗುರುತಿನ ಪ್ರಶ್ನೆ

ದಿನಾಂಕ : 26-03-2021 ಪ್ರಶ್ನೆ ಸಂಖ್ಯೆ : 310(2410)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀಮತಿ ಭಾರತಿ ಶೆಟ್ಟಿ(ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 26-03-2021

ಉತ್ತರಿಸುವ ಸಚಿವರು: ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ವಿಷಯ : BMTC ವತಿಯಿಂದ ಚಲಾಯಿಸುತ್ತಿರುವ ಬಸ್ಸುಗಳ ವ್ಯವಸ್ಥೆ ಕುರಿತು

(ಅ) ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ವತಿಯಿಂದ ಚಲಾಯಿಸುತ್ತಿರುವ ಕೆಲವು ಬಸ್ಸುಗಳು ತಗಡಿನ ಡಬ್ಬವಿದ್ದು, ಇಂಜಿನಿಗಿಂತ ವಿಪರೀತ ಶಬ್ದ ಬಸ್ಸಿನ ಇತರ ವಸ್ತುಗಳು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಪ್ರಸ್ತುತವಾಗಿ ಎಷ್ಟು ಸಂಸ್ಥೆಗಳಿಂದ ಬಸ್ಸುಗಳನ್ನು ಬಾಡಿಗೆ, ಗುತ್ತಿಗೆ ಅಥವಾ ಇತರೆ ರೀತಿಯಲ್ಲಿ ಯಾವ ಷರತ್ತುಗಳ ಅನ್ವಯ ಪಡೆಯಲಾಗುತ್ತಿದೆ; (ವಿವರ ಒದಗಿಸುವುದು)

(ಇ) ಕೇವಲ ತಮ್ಮ ಲಾಭಾಂಶದ ದೃಷ್ಟಿಯಿಂದ ಪ್ರಯಾಣಿಕರ ಹಿತಾಸಕ್ತಿಗೆ ವಿರುದ್ಧವಾಗಿ ಬಸ್ಸುಗಳನ್ನು ಸಂಸ್ಥೆಗೆ ನೀಡುತ್ತಿರುವವರ ವಿರುದ್ಧ ಇಲಾಖೆ ಕೈಗೊಂಡ ಕ್ರಮವೇನು;

(ಈ) ಕಳಪೆ ವಸ್ತುಗಳನ್ನು ಬಳಸಿ ಬಸ್ಸುಗಳನ್ನು ಸಿದ್ಧಪಡಿಸಿ ಸಂಸ್ಥೆಗೆ ನೀಡುತ್ತಿರುವವರ ಹಾಗೂ ಸಂಸ್ಥೆಯಲ್ಲಿನ ಭ್ರಷ್ಟರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು?